ಜನಪ್ರಿಯ ಕಲಾಮಾಲಿಕೆ

# ಫೋಟೋ ರಿಯಲಿಸಂ




ಕೆ. ವಿ. ಸುಬ್ರಹ್ಮಣ್ಯಂ




ಕರ್ನಾಟಕ ಲಲಿತಕಲಾ ಅಕಾಡೆಮಿ

# ಫೋಟೋರಿಯಲಿಸಂ

ಕೆ. ವಿ. ಸುಬ್ರಹ್ಮಣ್ಯಂ




ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560 002

**PHOTOREALISM** *by K. V. Subramanyam*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : **ರಿಚರ್ಡ್ ಎಸ್ಟ್ಸ್**

ಸಂಪಾದಕರು : **ಎಚ್. ಎ. ಅನಿಲಕುಮಾರ್**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು

# ಫೋಟೋರಿಯಲಿಸಂ

ಕಲಾವಿದನೊಬ್ಬ ತಾನು ಸೃಷ್ಟಿಸುವಾಗ ಹಲವು ರೀತಿಗಳನ್ನು ಅನುಸರಿಸುತ್ತಾನೆ. ಈ ಹಾದಿಯಲ್ಲಿ ಹಿಂದಿನಿಂದ ಬಳಸಲ್ಪಟ್ಟ ತಂತ್ರ ಶೈಲಿಗಳನ್ನು ತನ್ನ ಅಭಿವ್ಯಕ್ತಿಯ ನೆರವಿಗೆ ಪಡೆಯಬಹುದು. ಅಥವಾ ಹೊಸ ಹೊಸ ಶೈಲಿ ತಂತ್ರಗಳನ್ನೂ ಅನ್ವೇಷಿಸಿಕೊಳ್ಳಬಹುದು. ಹೀಗಾಗಿಯೇ ಇತಿಹಾಸಪೂರ್ವಕಾಲದಿಂದ ಇಂದಿನವರೆಗೆ ಕಲಾವಿದರು ತಮ್ಮ ಚಿತ್ರ, ಶಿಲ್ಪ ಹಾಗೂ ಪ್ರಿಂಟ್ ಮಾಧ್ಯಮಗಳಲ್ಲಿ ಹಲವಾರು ತಂತ್ರ ಹಾಗೂ ಶೈಲಿಗಳನ್ನು ಬಳಸಿರುವುದನ್ನು ಕಾಣುತ್ತೇವೆ. **ಫೋಟೋರಿಯಲಿಸಂ** ಅಂಥ ಶೈಲಿಗಳಲ್ಲಿ ಒಂದು.

ಅಮೂರ್ತ ಎಕ್ಸ್‌ಪ್ರೆಷನಿಸಂ(Abstract Expressionism)ಕಲೆಯನ್ನು ಪಶ್ಚಿಮದ ರಾಷ್ಟ್ರಗಳಲ್ಲಿ ಎಲ್ಲರಿಂದಲೂ ಅರಗಿಸಿಕೊಳ್ಳಲು ಆಗದ ಸಂದರ್ಭದಲ್ಲಿ ಕಲೆಯನ್ನು ಸಾಮಾನ್ಯರ ಹತ್ತಿರ ಕೊಂಡೊಯ್ಯುವ ಪ್ರತಿಕ್ರಿಯೆಯಾಗಿ ಪಾಪ್(pop)ಕಲೆ ಹುಟ್ಟಿಕೊಂಡಿತು. ಸಾಮಾನ್ಯ ಜನರು ದಿನನಿತ್ಯ ಬಳಸುವ ಮತ್ತು ನೋಡುವ ವಸ್ತುಗಳನ್ನು ಕಲೆಯಾಗಿ ತೋರಿಸಿತು. ಈ ಪಾಪ್ ಕಲೆಯ ಉತ್ತರಾಧಿಕಾರಿಯಂತೆ ಫೋಟೋರಿಯಲಿಸಂ, ಬದುಕನ್ನು ಪೂರ್ಣ ಬೆತ್ತಲುಗೊಳಿಸುವಂಥ ನಿಷ್ಕೃಷ್ಟ ವಿವರಗಳೊಂದಿಗೆ 1960-1970ರ ನಡುವೆ ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿ ಕಾಣಿಸಿಕೊಂಡಿತು. ತಾತ್ವಿಕ ಮತ್ತು ಕಲಾಸೃಷ್ಟಿಯ ದೃಷ್ಟಿಯಿಂದ ವಿಭಿನ್ನ ನೆಲೆಗಳಿಗೆ ಸೇರುವ ಹಲವಾರು ಕಲಾವಿದರು, ಹೊಸ ಕಲೆಯ ರೂಪ ಮತ್ತು ತಂತ್ರಗಳ ಹುಡುಕಾಟದಲ್ಲಿ ತೊಡಗಿ, ಸನಿಹ ಸೇರಿ ನ್ಯೂರಿಯಲಿಸ್ಟ್ (New Realists) ಎಂಬ ಗುಂಪಾದರು. ಆ ಹಿಂದಿನ ರಿಯಲಿಸಂಗೆ ಭಿನ್ನವಾಗಿ, ಆ ಸಂದರ್ಭದಲ್ಲಿ ಗಮನಾರ್ಹವಾದ ಹೊಸ ಕಲ್ಪನೆಗಳನ್ನು ರೂಪಿಸುವ ಯಾವನೇ ಕಲಾವಿದನನ್ನು ಒಬ್ಬ 'ನ್ಯೂರಿಯಲಿಸ್ಟ' ಎಂದೇ ಕರೆಯಲಾಗುತ್ತಿತ್ತು. ಈ ಹೊಸ ರಿಯಲಿಸ್ಟ್ ವೃಕ್ಷದ ಹಲವು ಕೊಂಬೆಗಳನ್ನು ಪರಿಚಯಿಸಲು, ವಿವರಿಸಲು ಇತರ ಹಲವಾರು ಪದಪುಂಜಗಳೂ ಚಲಾವಣೆಗೆ ಬಂದವು. ಅವುಗಳಲ್ಲಿ ಸೂಪರ್ ರಿಯಲ್, ಮ್ಯಾಜಿಕಲ್ ರಿಯಲ್; ಶಾರ್ಪ್ ಫೋಕಸ್, ರ್‍ಯಾಡಿಕಲ್ ರಿಯಲ್, ಹೈಪರ್ ರಿಯಲ್ ಮತ್ತು ರೊಮ್ಯಾಂಟಿಕ್ ರಿಯಲ್ ಮೊದಲಾದವನ್ನು ನೆನಪು ಮಾಡಿಕೊಳ್ಳಬಹುದು. ಈ ಎಲ್ಲ ಪದಪುಂಜಗಳಿಗೆ ಹಲವು ಅರ್ಥ

ಸೂಚನೆಗಳಿರುವುದರ ಜೊತೆಗೇ ಈ ಪದಗಳನ್ನು ಪರಸ್ಪರ ಬದಲಿಸಿ ಬಳಸಿಕೊಳ್ಳಲೂ ಬಹುದಾಗಿದೆ. ಹಾಗೆ ನೋಡಿದರೆ ನ್ಯೂರಿಯಲಿಸ್ಟ್ ಗಂಪಿನಲ್ಲಿ ಪಾಪ್‌ಕಲೆಯ ಕಲಾವಿದರೂ ಇದ್ದರು.

19ನೆಯ ಶತಮಾನದಲ್ಲಿ ಛಾಯಾಚಿತ್ರಗ್ರಹಣ ಉತ್ತಮಪಡಿಸಲ್ಪಟ್ಟು ಕ್ಯಾಮರಾ ಬಳಕೆ ಹೆಚ್ಚಾಯಿತು. ಅದೇ ಕಾಲಕ್ಕೆ ಅಂದಿನ ಕಲಾಶಾಲೆಗಳಲ್ಲಿ ಅತ್ಯುತ್ತಮ ನೈಜ ಚಿತ್ರಕಾರರನ್ನು ಮತ್ತು ಅವರಿಂದ ಸೃಷ್ಟಿಯಾಗಿದ್ದ ಚಿತ್ರ ಮತ್ತು ಶಿಲ್ಪಗಳನ್ನು ಕಾಣಬಹುದಿತ್ತು. ಈ ನೈಜ ಶೈಲಿಯ(Realism) ನಿಯಮ ಹಾಗೂ ಕಟ್ಟುಪಾಡುಗಳಿಂದ ದೂರ ಸರಿಯುವ ಪ್ರಕ್ರಿಯೆ ಯೂರೋಪಿನಲ್ಲಿ ಸೆಝಾನ್ (Cezanne) ಮತ್ತು ಫ್ರೆಂಚ್ ಇಂಪ್ರೆಷನಿಸ್ಟ್ ಕಲಾವಿದರಿಂದ ಆರಂಭವಾಯಿತು. ಅದು ಆಧುನಿಕ ಕಲೆಯ ಆರಂಭದ ಸಂದರ್ಭ. ನಂತರದ ದಶಕಗಳಲ್ಲಿ ಅದನ್ನು ಅನುಸರಿಸುವ ಹಲವು ಹೊಸ ದೃಷ್ಟಿಗಳ ಕಲಾವಿದರು ಮತ್ತು ಚಳುವಳಿಗಳು, ನೈಜಶೈಲಿಯ ಗಡಿಗಳನ್ನು ಮತ್ತಷ್ಟು ದೂರ ತಳ್ಳಿ ಸ್ವಚ್ಛಂದರಾದರು. ಮಿನಿಮಲ್ (Minimal), ಕಾನ್ಸೆಪ್ಚುಯಲ್(Conceptual) ಮತ್ತು ಎನ್‌ವಿರೋನ್‌ಮೆಂಟಲ್ (Environmental) ಕಲೆಗಳು ಕಾಣಿಸಿಕೊಂಡು, ಮರದ ಚೌಕಟ್ಟಿನ ಚಿತ್ರಾಧಾರದ ನೆರವಿನಿಂದ ಚಿತ್ರಿಸುವ ರೀತಿ ಮುಗಿದುಹೋಯಿತೆಂಬ ಪರಿಸ್ಥಿತಿ ನಿರ್ಮಾಣವಾಯಿತು. ಫೋಟೋರಿಯಲಿಸ್ಟ್ ಕಲಾವಿದರು ಈ ಸ್ವತಂತ್ರ ಪರಂಪರೆಯಿಂದ ಬೆಳೆದದ್ದೇ ಅಲ್ಲದೆ ಹಲವು ರೀತಿಗಳಲ್ಲಿ ತಮ್ಮತನವನ್ನು ಲೇಪಿಸಿದರು. ಈ ಫೋಟೋರಿಯಲಿಸ್ಟ್ ಕಲಾವಿದರ ಬಹುಮುಖ್ಯ ವಸ್ತುವಿಶೇಷವು ಛಾಯಾಚಿತ್ರವೇ(photograph) ಆಯಿತು. ಆದರೆ ಹೇಗೆ ಮತ್ತು ಏಕೆ ಒಂದು ನಿರ್ದಿಷ್ಟ ಛಾಯಾಚಿತ್ರವನ್ನು ವರ್ಣಚಿತ್ರವಾಗಿಸ ಲಾಗುತಿತ್ತು ಎಂಬುದು ಆಯಾಕಲಾವಿದರ ಅಭಿವ್ಯಕ್ತಿಯ ದೃಷ್ಟಿಗೆ ಸೇರಿದುದಾಗಿತ್ತು.

1972ರಲ್ಲಿ ಅಮೆರಿಕದ ಜಾನಿಸ್ ಗ್ಯಾಲರಿಯಲ್ಲಿ ಫೋಟೋಗ್ರಾಫ್‌ಗಳನ್ನು ಬಳಸಿಕೊಂಡು ಸೃಷ್ಟಿಯಾಗಿದ್ದ ಕಲಾಕೃತಿಗಳ ಪ್ರದರ್ಶನಕ್ಕೆ 'ಶಾರ್ಪ್‌ಫೋಕಸ್ ರಿಯಲಿಸಂ' ಎಂಬ ಶೀರ್ಷಿಕೆಯನ್ನು ನೀಡಲಾಗಿತ್ತು. 1968ರಲ್ಲಿ ರಿಚರ್ಡ್ ಎಸ್ಟೆಸ್, ಛುಕ್ ಕ್ಲೋಸ್‌ರವರುಗಳ ಸೃಷ್ಟಿಗಳನ್ನು ನೋಡಿದ ಲೂಯಿಸ್ ಕೆ. ಮೈಸೆಲ್, ಅವುಗಳ ರೂಪ ಮತ್ತು ಶೈಲಿಗಳ ದೃಷ್ಟಿಯಿಂದ ಫೋಟೋಗ್ರಾಫಿಕ್ ರಿಯಲಿಸಂ ಪಟ್ಟಿಗೆ ಸೇರಿಸಿದರು. ಅನಂತರ ಈ ಇಬ್ಬರು ಫೋಟೋ ರಿಯಲಿಸ್ಟ್ಸ್ ಮತ್ತು ಇನ್ನಿತರ ಇಂಥ ಹಲವರ ಕೃತಿಗಳನ್ನು 'ಫೋಟೋರಿಯಲಿಸಂ' ಹಾದಿಯದು ಎಂದೇ ಕರೆಯತೊಡಗಿದರು. ಎರಡು ವರ್ಷಗಳ ನಂತರ 1970ರ ಜನವರಿಯಲ್ಲಿ ನ್ಯೂಯಾರ್ಕಿನ ವಿಟ್ನಿ ಮ್ಯೂಸಿಯಂನ "ಇಪ್ಪತ್ತೆರಡು ರಿಯಲಿಸ್ಟ್‌ಗಳ" ಪ್ರದರ್ಶನದ ವಿವರಣ ಪತ್ರ (ಕ್ಯಾಟಲಾಗ್)ದಲ್ಲಿ ಮೊದಲಬಾರಿಗೆ ಮುದ್ರಿತ ಅಕ್ಷರಗಳಲ್ಲಿ ಈ ಪದಪುಂಜಗಳು ಕಾಣಿಸಿಕೊಂಡವು. ಹೊಸರಿಯಲಿಸಂನ ದೊಡ್ಡ ರೀತಿಯ

ಪರಿಚಯದಂಥ ಈ ಪ್ರದರ್ಶನದ ಮೂರರಲ್ಲಿ ಒಂದು ಭಾಗದ ಕಲಾವಿದರು ಫೋಟೋರಿಯಲಿಸಂಗೆ ಸೇರಿದವರಾಗಿದ್ದರು. ಆದರೂ ಅವರುಗಳನ್ನು ಈ ಶೀರ್ಷಿಕೆಯಡಿ ಪಟ್ಟಿಮಾಡಿರಲಿಲ್ಲ. ಹೀಗೆ ಈ ಪದ ತನ್ನ ಖಚಿತ ಸ್ವರೂಪವನ್ನು ಪರಿಚಯಿಸಿಕೊಳ್ಳಲಾರದೆ ಹೋಯಿತು. ಹಲವು ವರ್ಷಗಳ ಕಾಲ ಲೂಯಿಸ್ ಎ. ಮೈಸೆಲ್ ಈ ಪದಪುಂಜವನ್ನು ಬಳಸಿ ಪ್ರಚಾರ ನೀಡಿದ ನಂತರ ಫೋಟೋರಿಯಲಿಸ್ಟ್ ಅಥವಾ ಫೋಟೋ ರಿಯಲಿಸಂ ಎಂದರೆ ಏನು? ಎಂದು ತಮ್ಮಲ್ಲೇ ಪ್ರಶ್ನಿಸಿಕೊಂಡರು. ಆಗ ಅವರು ಕಂಡುಕೊಂಡ ಉತ್ತರ ಸ್ಕೆಚ್‌ಪ್ಯಾಡ್‌ಗೆ ಬದಲಾಗಿ ಕ್ಯಾಮರಾ ಬಳಸುವ ಗ್ರಿಡ್(Grid) (ಸಮಾನಾಂತರ ರೇಖೆಗಳ ಚೌಕಟ್ಟು) ಅಥವಾ ಪ್ರೊಜೆಕ್ಟರ್ ನೆರವಿನಿಂದ ಚಿತ್ರಿಸುವ ಅವಕಾಶಕ್ಕೆ (Space) ರೂಪಗಳನ್ನು ವರ್ಗಾಯಿಸುವ ಮತ್ತು ಚಿತ್ರವನ್ನು ಫೋಟೋಗ್ರಾಫ್‌ನಂತೆ ಚಿತ್ರಿಸುವ ಸಾಮರ್ಥ್ಯವಿರುವವರನ್ನು ಫೋಟೋರಿಯಲಿಸ್ಟ್ ಎಂದು ಕರೆಯಬಹುದೆಂದುಕೊಂಡರು. ಅಂಥವರ ಕೃತಿಗಳನ್ನು ಫೋಟೋರಿಯಲಿಸಂ ಶೈಲಿಯಲ್ಲಿದೆ ಎಂದು ಹೇಳಬಹುದೆಂದು ಕೊಂಡರು. ಪ್ರಾರಂಭದ ಈ ವಿವರಣೆ ಅಸ್ಪಷ್ಟತೆಯಿಂದ ಕೂಡಿತ್ತು. ನಿಜವಾದ ಫೋಟೋ ರಿಯಲಿಸ್ಟ್‌ಗಳಲ್ಲದವರೂ ಈ ಪಟ್ಟಿಗೆ ಸೇರಿಬಿಡುವಂತಾಗಿತ್ತು. ಲೂಯಿಸ್ ಕೆ. ಮೈಸೆಲ್‌ರವರು ಕಲಾ ಸಂಗ್ರಾಹಕರ ಸ್ಟೂವರ್ಟ್ ಎಂ. ಸ್ಪೈಸೆರ್‌ರವರ ಕೋರಿಕೆಯಂತೆ ಫೋಟೋರಿಯಲಿಸಂಗೆ ಸೇರಿದ ಕವಿಗಳ ಸಂಗ್ರಹವೊಂದನ್ನು ನಿಯೋಜಿಸಿಕೊಟ್ಟರು.

1972ರಲ್ಲಿ ಫೋಟೋರಿಯಲಿಸಂಗೆ ಲೂಯಿಸ್ ಕೆ. ಮೈಸೆಲ್ ಐದು ಅಂಶಗಳ ಸ್ಪಷ್ಟ ವಿವರಣೆಯೊಂದನ್ನು ಪ್ರಕಟಿಸಿದರು. ಈ ಪದಪುಂಜವನ್ನು ಮತ್ತು ಕಲಾವಿದರನ್ನು ದೊಡ್ಡ ರೀತಿಯಲ್ಲಿ ಪರಿಚಯಿಸಲು ಅಂಥ ಕೃತಿಗಳ ಸಂಗ್ರಹವನ್ನು 'ಫೋಟೋರಿಯಲಿಸಂ -1973' ಶೀರ್ಷಿಕೆಯಡಿ 20ಕ್ಕೂ ಹೆಚ್ಚು ಮ್ಯೂಸಿಯಂಗಳಲ್ಲಿ ಪ್ರದರ್ಶಿಸಿದರು. 1978ರಲ್ಲಿ ಸ್ಪೈಸೆರ್ ಆ ಎಲ್ಲ ಕಲಾಕೃತಿಗಳನ್ನು ಸ್ಮಿತ್‌ಸೋನಿಯನ್ ಸಂಸ್ಥೆಗೆ ಪ್ರದರ್ಶನಕ್ಕಾಗಿ ದಾನಮಾಡಿದರು. ಲೂಯಿಸ್ ಕೆ. ಮೈಸೆಲ್‌ರವರ ದೃಷ್ಟಿಯಲ್ಲಿ ಫೋಟೋರಿಯಲಿಸ್ಟ್ ಚಳುವಳಿಗೆ ಕೊಡುಗೆ ನೀಡಬಹುದಾದ ಕಲಾವಿದನು:

1) ವಿಷಯ ಸಂಗ್ರಹಕ್ಕಾಗಿ ಕ್ಯಾಮರಾ ಅಥವಾ ಛಾಯಾಚಿತ್ರವನ್ನು ಅವಲಂಬಿಸುತ್ತಾನೆ.

2) ತನ್ನ ಗ್ರಹಿಕೆಗಳನ್ನು ಕ್ಯಾನ್‌ವಾಸ್ ಅವಕಾಶಕ್ಕೆ(Space) ವರ್ಗಾಯಿಸಲು ಯಾಂತ್ರಿಕ ಅಥವಾ ಅರೆಯಾಂತ್ರಿಕ ಸಾಧನಗಳನ್ನು ಬಳಸುತ್ತಾನೆ.

3) ತನ್ನ ಕಲಾಕೃತಿಯು ಛಾಯಾಚಿತ್ರದಂತೆ ಕಾಣುವಹಾಗೆ ಚಿತ್ರಿಸುವ ತಾಂತ್ರಿಕ ಸಾಮರ್ಥ್ಯ ಹೊಂದಿರುತ್ತಾನೆ.

4) 1972ರ ಹೊತ್ತಿಗೆ ಫೋಟೋರಿಯಲಿಸ್ಟ್ ಕೃತಿಯನ್ನು ಪ್ರದರ್ಶಿಸಿದ ಕಲಾವಿದನನ್ನು ಸೆಂಟ್ರಲ್-ಫೋಟೋರಿಯಲಿಸ್ಟ್ ಎಂದು ಪರಿಗಣಿಸಲಾಗುವುದು.

5) ಫೋಟೋರಿಯಲಿಸಂನ ಬೆಳವಣಿಗೆಗೆ ಮತ್ತು ಫೋಟೋರಿಯಲಿಸ್ಟ್ ಕೃತಿಗಳ ಪ್ರದರ್ಶನಕ್ಕೆ ಕನಿಷ್ಟ ಐದು ವರ್ಷಗಳಷ್ಟಾದರೂ ಶ್ರಮಿಸಿರಬೇಕು. ಈ ದೃಷ್ಟಿಯಿಂದ ಪಟ್ಟಿಮಾಡಲ್ಪಟ್ಟ ಮುಖ್ಯ ಕಲಾವಿದರು ರಾಬರ್ಟ್ ಬೆಚ್‌ಟ್ಲೆ, ಚಾಲ್ಸ್ ಬೆಲ್, ಟಾಮ್ ಬ್ಲಾಕ್ ವೆಲ್, ಛುಕ್ ಕ್ಲೋಸ್, ರಾಬರ್ಟ್ ಕೋಟಿಂಗ್‌ಹಾಮ್, ಡಾನ್ ಎಡ್ಡಿ, ರಿಚರ್ಡ್ ಎಸ್ಟೆಸ್, ಆಂಡ್ರೆ ಪ್ಲಾಕ್, ರಾಲ್ಫ್‌ಗೋಯಿಂಗ್ಸ್ ರಾನ್ ಕ್ಲೀಮಾನ್ಸ್, ರಿಚರ್ಡ್ ಮೆಕ್ಲಿನ್, ಜಾನ ಸಾಲ್ಟ್, ಬೆನ್‌ಸ್ಕೋನ್ ರ್ಝ್ಯುಟ್. ನಂತರ ಇವರನ್ನು ಹಲವಾರು ಕಲಾವಿದರು ಅನುಸರಿಸಿದರು.

ಫೋಟೋರಿಯಲಿಸ್ಟ್ ಕಲಾವಿದ ತನ್ನ ಕಲಾಸೃಷ್ಟಿಯ ವಸ್ತು-ಆಶಯಗಳಿಗಾಗಿ ಹಿಂದಿನ ನೈಜಶೈಲಿಯ (ರಿಯಲಿಸಂ) ಕಲಾವಿದರಂತೆ ರೇಖಿಸಿ, ವ್ಯಕ್ತಿಗಳ ಅಧ್ಯಯನ ಮಾಡಿ ನೇರವಾಗಿ ಚಿತ್ರಿಸ ಹೊರಡುವುದಿಲ್ಲ. ಈ ಪದಗಳೇ ಹೇಳುವಂತೆ ಕ್ಯಾಮರಾ ಮತ್ತ ಛಾಯಾಚಿತ್ರಗಳನ್ನು ಬಳಸುತ್ತಾನೆ. ಫೋಟೋರಿಯಲಿಸ್ಟ್ ಒಬ್ಬನ ಕಲಾಕೃತಿಗೆ ಛಾಯಾಚಿತ್ರದ ಹಿನ್ನೆಲೆ ಅಥವಾ ನೆರವಿಲ್ಲದೆ ಅಸ್ತಿತ್ವವಿಲ್ಲ. ಅಕೆಡೆಮಿಕ್ ರಿಯಲಿಸ್ಟ್ ಕೃತಿಗಳಿಗಿಂತಲೂ ಫೋಟೋರಿಯಲಿಸ್ಟ್ ಕಲಾವಿದನ ಕೃತಿಗಳಲ್ಲಿ ಸ್ಪಷ್ಟತೆ, ನಿಷ್ಕೃಷ್ಟತೆ ಮತ್ತು ನೇರವಾದ ವಿವರ ವಿಶೇಷಗಳಿರುತ್ತವೆ. ಈ ಕಾರಣದಿಂದ ಈ ಕೃತಿಗಳು ಅಪಾರ ಮೆಚ್ಚುಗೆಗೆ ಪಾತ್ರವಾದವು. ಹಾಗೆ ನೋಡಿದರೆ ಫೋಟೋರಿಯಲಿಸಂನ ಬಹುದೊಡ್ಡ ಕೊಡಗೆ ಎಂದರೆ ಅಂದಿನ ಸಮಕಾಲೀನ ಕಲೆಗೆ ಕರಕುಶಲತೆ ಮತ್ತು ಲೇಖನಗಾರಿಕೆಯನ್ನು (draftsmanship) ಪುನಃ ಸೇರ್ಪಡೆಮಾಡಿದ್ದು. (ಅಮೂರ್ತ ಎಕ್ಸ್‌ಪ್ರೆಷನಿಸಂ ಮತ್ತು ಪಾಪ್ ಕಲಾಚಳುವಳಿಗಳ ಹಿನ್ನೆಲೆಯಲ್ಲಿ ಈ ಅಂಶವನ್ನು ಗಮನಿಸಬೇಕು). ಅಂದರೆ ಫೋಟೋರಿಯಲಿಸಂ ಅಕೆಡೆಮಿಕ್ ರಿಯಲಿಸಂ ಸಂಪ್ರದಾಯದಿಂದ ಹುಟ್ಟಿಬಂದದ್ದಲ್ಲ; ಆಧುನಿಕ ಸಂಪ್ರದಾಯದಿಂದ ಮೂಡಿಬಂದದ್ದು. ಅದರಲ್ಲೂ ವಿಶೇಷವಾಗಿ ಅಮೂರ್ತ ಎಕ್ಸ್‌ಪ್ರೆಷನಿಸಂ ಮತ್ತು ಪಾಪ್‌ಕಲೆಗಳಿಂದ.

ಫೋಟೋರಿಯಲಿಸ್ಟರು ತಮಗೆ ಅಗತ್ಯವೆನಿಸಿದ ವಸ್ತು-ದೃಶ್ಯಗಳ ಜಾರುಗಾಜು(ಸ್ಲೈಡ್) ಅಥವಾ ವರ್ಣಪಾರದರ್ಶಿಕೆಯನ್ನು ಸರಳವಾಗಿ ಪ್ರೊಜೆಕ್ಟರ್‌ನಿಂದ ಕ್ಯಾನ್‌ವಾಸ್‌ನ ಅವಕಾಶಕ್ಕೆ ಪ್ರೊಜೆಕ್ಟ್ ಮಾಡುತ್ತಾರೆ. ಪ್ರೊಜೆಕ್ಟ್ ಮಾಡಿದ ಬಿಂಬದ ಮೇಲೆ ಕಲಾವಿದ ವಿಶೇಷ ಎಚ್ಚರದಿಂದ ಅಗತ್ಯವಾದ ಎಲ್ಲ ವಿವರ, ವಿಷಯಗಳನ್ನು ರೇಖಿಸುತ್ತಾನೆ. ಬೆಲ್, ಬ್ಲಾಕ್, ವೆಲ್, ಗೋಯಿಂಗ್ಸ್, ಕ್ಲೀಮ್ಯಾನ್, ಮೆಕ್ಲೀನ್, ಸಾಲ್ಟ್ ಮೊದಲಾದವರು ಈ ವಿಧಾನ ಬಳಸಿಕೊಂಡವರು. ಕಲಾವಿದನ ಗ್ರಹಿಕೆಗಳನ್ನು ಕ್ಯಾನ್‌ವಾಸ್ ಅವಕಾಶಕ್ಕೆ ವರ್ಗಾಯಿಸಲು ಗ್ರಿಡ್ ವ್ಯವಸ್ಥೆಯ ನೆರವೂ

ಪಡೆಯಲಾಗುತ್ತದೆ. ಪೌಲ್ಸ್ ಸ್ಟೈಗರ್ ಮೂಲತಃ ರೇಖೆಗಳೂ ಅಗತ್ಯವಿಲ್ಲದಂತೆ ಬೆಳಕಿನ ಕ್ರಿಯೆಗೆ ಸ್ಪಂಧಿಸುವ ಛಾಯಾಚಿತ್ರಗ್ರಹಣ ಕಾಗದ ಅಥವಾ ಕ್ಯಾನ್‌ವಾಸ್ ಅವಕಾಶದಲ್ಲಿ, ಛಾಯಾಚಿತ್ರದಲ್ಲಿನ ಬಿಂಬಗಳನ್ನು ಸಂಸ್ಕರಿಸುತ್ತಿದ್ದ. ಮತ್ತೆ ಕೆಲವರು ಕಲಾಕೃತಿಗಳನ್ನು ಛಾಯಾಚಿತ್ರಗಳೊಂದಿಗೆ ಸ್ಪರ್ಧಿಸುವಂತೆ, ಛಾಯಾಚಿತ್ರದ ಅನುಭವ ನೀಡುವಂತೆ ಚಿತ್ರಿಸುವ ತಾಂತ್ರಿಕ ಸಾಮರ್ಥ್ಯವನ್ನು ಹೊಂದಲು ಏರ್‌ಬ್ರಷ್‌ಗಳನ್ನು ಬಳಸಿದ್ದಾರೆ. ಛುಕ್ ಕ್ಲೋಸ್ ಏರ್‌ಬ್ರಷ್ ಅನ್ನು ವಿಶೇಷವಾಗಿ ಬಳಸಿದವನು, ತನ್ನ 9 ಅಡಿ ಉದ್ದದ ಕಪ್ಪು ಬಿಳುಪು ಚಿತ್ರವೊಂದಕ್ಕೆ ಒಟ್ಟಾರೆ ಎರಡು ಟೇಬಲ್ ಸ್ಪೂನ್ ಕಪ್ಪುವರ್ಣದ್ರವ್ಯವನ್ನು ಮಾತ್ರ ಬಳಸಿದ್ದ!

1973ರವರೆಗಿನ ಫೋಟೋರಿಯಲಿಸ್ಟರ ಬಹುತೇಕ ಸೃಷ್ಟಿಗಳು ಕ್ಯಾನ್ವಾಸ್ ಅವಕಾಶದಲ್ಲಿ ಆಕ್ರಿಲಿಕ್ ಅಥವಾ ತೈಲವರ್ಣಗಳಲ್ಲಿರುತ್ತಿದ್ದವು. ಇತರ ಮಾಧ್ಯಮಗಳ ಕಡೆಗೆ ಅಷ್ಟೇನೂ ಹೆಚ್ಚಿನ ಆಸಕ್ತಿಯಿರಲಿಲ್ಲ. ಫೋಟೋರಿಯಲಿಸ್ಟ್ ಕಲಾವಿದರ ಕೃತಿಸೃಷ್ಟಿಗೆ ಪೀಠಿಕಾರೂಪದ ರೇಖಾಚಿತ್ರಗಳು ಮತ್ತು ಜಲವರ್ಣ ಚಿತ್ರಗಳ ಅಗತ್ಯವಿಲ್ಲದಿದ್ದರಿಂದ ಅವರು ಈ ಎರಡು ಮಾಧ್ಯಮಗಳಿಗೆ ಗಮನ ನೀಡಬೇಕಾಗಿರಲಿಲ್ಲ . ಆದರೂ ಗೋಯಿಂಗ್ಸ್, ಮಕ್ಲೀನ್, ಬ್ಲಾಕ್‌ವೆಲ್, ಕ್ಲೋಸ್ ಮತ್ತು ಸಾಲ್ಟ್ 1972 ಮತ್ತು 1973ರಲ್ಲಿ ಜಲವರ್ಣ ಚಿತ್ರಗಳನ್ನು ಮತ್ತು ರೇಖಾಚಿತ್ರಗಳನ್ನೂ ಚಿತ್ರಿಸಿದ್ದರು. ಅದೇ ಅವಧಿಯಲ್ಲಿ ಪ್ರಿಂಟ್ ಮಾಧ್ಯಮವನ್ನೂ ತಮ್ಮ ಅಭಿವ್ಯಕ್ತಿಯಲ್ಲಿ ನೆರವಾಗಿಸಿಕೊಂಡು ಹೊಸತನದ ಹಲವಾರು ಪ್ರಿಂಟ್(Print)ಗಳನ್ನು ಸೃಷ್ಟಿಸಿದರು; ಹಲವು ಸಮಸ್ಯೆಗಳ ಪರಿಹಾರವನ್ನು, ಆ ಮಾಧ್ಯಮದ ತಜ್ಞರಿಂದ ಕಂಡುಕೊಂಡರು. 1972ರಲ್ಲಿ Shorewood Atelier (Atelier-ಕಲಾಕಾರ್ಯಗಾರ) ಫೋಟೋರಿಯಲಿಸ್ಟ್‌ಗಳ 10 ಪ್ರಿಂಟ್‌ಗಳ ಸಂಪುಟವೊಂದನ್ನು ಡಾಕ್ಯುಮೆಂಟಾ-5 ಕ್ಕಾಗಿ ಸಿದ್ಧಪಡಿಸಿತು. ಕೆಲವರು ಲಿಥೋ, ಸ್ಕ್ರೀನ್‌ಪ್ರಿಂಟ್ ಹಾಗೂ ಎಚ್ಚಿಂಗ್ ತಂತ್ರಗಳಲ್ಲಿ ಫೋಟೋ ರಿಯಲಿಸಂ ಅನ್ನು ಪ್ರಯೋಗಿಸಿದರು. ಕಲಾವಿದ ಕ್ಲೋಸ್ ಮೆಝೋಟಿಂಟ್ (Mezotint)ತಂತ್ರದಲ್ಲೂ ಅಭಿವ್ಯಕ್ತಿಸಿದನು.

ಪ್ರಾರಂಭದ ಒಂದು ಹಂತದಲ್ಲಿ ಈ ಕಲಾವಿದರು ತಮ್ಮ ಸ್ವ-ಭಾವಚಿತ್ರಣದಲ್ಲಿ ಹೆಚ್ಚಿನ ಆಕರ್ಷಣೆ ಕಂಡುಕೊಂಡಿದ್ದರು, ವರ್ಣಚಿತ್ರಕಲೆಗೆ ಛಾಯಾಚಿತ್ರ ಮಾಧ್ಯಮದ ಅಂದಿನ ಎಲ್ಲ ಸಾಧ್ಯತೆಗಳನ್ನೂ ಬಳಸಿಕೊಳ್ಳುವುದರತ್ತ ಆಸಕ್ತರಾಗಿದ್ದ ಛುಕ್ ಕ್ಲೋಸ್ ಸ್ವತಃ ಛಾಯಾಚಿತ್ರಕಾರರಿದ್ದರು ಫೋಟೋಗ್ರಾಫಿಕ್ ಭಾವಚಿತ್ರಕಲ್ಪನೆಯಲ್ಲಿ ಹೆಚ್ಚು ಪ್ರಯೋಗಶೀಲತೆಯನ್ನು ಈ ಕಲಾವಿದರು ತೋರಿದರು ಆಲ್‌ಫ್ರೆಡ್ ಲೆಸ್ಲೈನ ಬೃಹತ್ ಸ್ವಭಾವ ಚಿತ್ರಗಳಲ್ಲಿ (1973) ಒಂದು ರೀತಿಯಲ್ಲಿ ಕ್ರೌರ್ಯದ ಒಳನೋಟಗಳ ದರ್ಶನ ಅನುಭವಿಸಬಹುದು.

ಹೊಸ ಪ್ಲಾಸ್ಟಿಕ್(plastic) ಮಾಧ್ಯಮಗಳಾದ ಪಾಲಿಯೆಸ್ಟರ್, ರೆಸೀನ್ ಮತ್ತು ಫೈಬರ್ ಗಾಜು ಇತ್ಯಾದಿಗಳು ಈ ಕಲಾವಿದರ ಕೈಗೆ ಸಿಕ್ಕಿ ಹೊಸ ರೂಪವನ್ನು ಪಡೆದು ಕೊಂಡವು. ಜೀವಂತ ವ್ಯಕ್ತಿಗೆ ಹತ್ತಿರವಾದ ಚರ್ಮ, ಮಾಂಸಗಳ ಮೈವಳಿಕೆಗಳನ್ನು(textures) ತಂದುಕೊಳ್ಳುವುದು ಸಾಧ್ಯವಾಗಿ, ಪ್ರಕೃತಿಯು ಅತ್ಯುತ್ತಮವಾಗಿ ನಕಲುಮಾಡಲ್ಪಟ್ಟಿತು. ಹ್ಯಾನ್‌ಸನ್‌ನ ಪಾಲಿಕ್ರೋಮ್ ಮಾಡಲ್ಪಟ್ಟ ಫೈಬರ್ ಗಾಜು ಮತ್ತು ಪಾಲಿಯೆಸ್ಟರ್ ಮಾಧ್ಯಮದ ಆಳೆತ್ತರದ 'ಫ್ಲೋರಿಡಾ ಶಾಪರ್'(Florida shopper) (1970) ಶಿಲ್ಪ, ಜಾನ್ ಆಂಡ್ರಿಯಾ ಸೃಷ್ಟಿಸಿದ ಸ್ಟೂಲಿನ ಮೇಲೆ ಕುಳಿತ ಮಹಿಳೆಯ (ಪಾಲಿಯೆಸ್ಟರ್ ರೆಸೀನ್ ಮತ್ತು ಫೈಬರ್ ಗಾಜು) ಆಳೆತ್ತರ ಮಿಶ್ರಮಾಧ್ಯಮದ ಶಿಲ್ಪಗಳು ನಮ್ಮ ಮುಂದೆ ಜೀವಂತ ವ್ಯಕ್ತಿಗಳಂತೆ, ಉಸಿರಾಡುತ್ತಿರುವಂತೆ ಕಾಣುತ್ತವೆ.

ಕಲಾವಿದರು ನೈಜತೆಯ ಹೊಸದೃಷ್ಟಿಗೆ ಒತ್ತು ನೀಡಿದ ಕಾರಣದಿಂದಾಗಿ ನಗ್ನಚಿತ್ರಗಳ ಅಧ್ಯಯನ, ಚಿತ್ರ ಮತ್ತು ಶಿಲ್ಪಗಳಲ್ಲಿ, ಪುನರಾರಂಭಿಸಲ್ಪಟ್ಟಿತು. ಹೈಲೊಚಿನ್, ಜಾನ್‌ಕ್ಲೆನ್, ಕ್ಲಾರ್ಕ್‌ರವರುಗಳ ಅಂಥ ನಗ್ನಚಿತ್ರಗಳನ್ನೂ ರೆಗ್ ಬಟ್ಲೆರ್, ಜಾನ್‌ಡೇ ಆಂಡ್ರಿಯಾರವರುಗಳ ನಗ್ನ ಶಿಲ್ಪಗಳನ್ನು ಈ ದೃಷ್ಟಿಯಿಂದ ಗಮನಿಸಬಹುದು.

1972ರ ಹೊತ್ತಿಗೆ ತನ್ನ ಅತ್ಯುನ್ನತ ಹಂತ ತಲುಪಿದ್ದ ಫೋಟೋರಿಯಲಿಸಂ ಶೈಲಿಯಲ್ಲಿ ಅಭಿವ್ಯಕ್ತಿಸುತ್ತಿದ್ದ ಕಲಾವಿದೆ ಪ್ಲಾಕ್‌ಳ ಈ ಶೈಲಿಯ ಮೊದಲ ಕೃತಿ 'Icennedy motorcade' 1964ರಲ್ಲೆ ಪೂರ್ಣಗೊಂಡಿತ್ತು. ಕ್ಲೋಸ್ ಮತ್ತು ಎಸ್ಟೆಸ್‌ರವರುಗಳದ್ದು, 1967ರಲ್ಲಿ ಸೃಷ್ಟಿಯಾದವು.

ವಿಟ್‌ನೆ ಮ್ಯೂಸಿಯಂ 1970ರ ದಶಕವನ್ನು 'twenty-two realists' ಪ್ರದರ್ಶನದಿಂದ ಪ್ರಾರಂಭಿಸಿತು. 1972ರ ಹೊತ್ತಿಗೆ ಪಶ್ಚಿಮ ಜರ್ಮನಿಯ ಕಾಸೆಲ್‌ನ (Kassel) 'ಡಾಕ್ಯುಮೆಂಟಾ-5' ಕಲಾಪ್ರದರ್ಶನವೂ ಸೇರಿದಂತೆ ಹಲವಾರು 'ಫೋಟೋರಿಯಲಿಸ್ಟ್' ಕೃತಿಗಳಿದ್ದ ಪ್ರದರ್ಶನಗಳು ನಡೆದವು. ಈ ಶೈಲಿಯ ಎರಡನೆಯ ತಲೆಮಾರಿನ ಕಲಾವಿದರ ಆಗಮನ ಚೆನ್, ಮೆನ್‌ಡೆನ್ ಹಾಲ್ ಮತ್ತು ಓಟ್ ಮೊದಲಾದವರಿಂದ ಆಯಿತು. ಈ ಹೊಸ ತಲೆಮಾರಿನ ಕಲಾವಿದರು ಈ ಶೈಲಿಯಲ್ಲಿ ಹಿಂದಿನವರಿಗಿಂತ ಭಿನ್ನವಾಗಿ, ಮಾನವರೂಪಗಳನ್ನು ಕಾಣಿಸಿದ್ದಾರೆ. ನಂತರ ಹಲವಾರು ಕಲಾವಿದರು ಈ ಶೈಲಿಯಲ್ಲಿ ಚಿತ್ರಿಸುತ್ತಿದ್ದಾರೆ.

ಈ ಹಿಂದೆ ಇಂಪ್ರೆಷನಿಸ್ಟರ ಕಾಲದಿಂದಾರಂಭಿಸಿ ಹಲರಾರು ಕಲಾಚಳವಳಿ, ಶೈಲಿಗಳ ಕಾಲಕ್ಕೆ ಆ ಕಲಾವಿದರೊಂದಿಗೆ ಕವಿಗಳು, ಲೇಖಕರು ಇದ್ದರು. ಮೆಚ್ಚುಗೆ, ಟೀಕೆ, ವಿಮರ್ಶೆಗಳೂ ಇರುತ್ತಿದ್ದವು. ನಂತರದ ಹಲವು ಕಲಾಚಳವಳಿಗಳಾದ

ಅಮೂರ್ತ ಎಕ್ಸಪ್ರೆಷನಿಸಂ, ಪಾಪ್, ಆಪ್, ಮಿನಿಮಲ್, ಕಾನ್‌ಸೆಪ್ಚುಯಲ್, ಎನ್ವಿರೋನ್‌ಮೆಂಟಲ್, ನಿಹಿಲಿಸ್ಟ್ ಹ್ಯಾಪೆನಿಂಗ್ಸ್ ಮತ್ತು ಪರ್‌ಫಾತ್ ಮೆನ್ಸಸ್, ಅರ್ಥಆರ್ಟ್, ವಿಡಿಯೋ ಮತ್ತು ಕೈನೆಟಿಕ್ ಆರ್ಟ್, ಅಸೆಂಬ್ಲೇಜ್, ಇನ್ಸ್ಟಲೇಷನ್ ಮೊದಲಾದ ಹಲವು ಸಂದರ್ಭಗಳಲ್ಲಿ ಕಲಾವಿದರಲ್ಲಿ ಪರಸ್ಪರ ಕೊಡುಕೊಳ್ಳುವಿಕೆಗಳು ಇದ್ದವು. ಸಾವಿರಾರು ಕಲಾವಿದರು, ಲಕ್ಷಗಟ್ಟಲೆ ಕೊಳ್ಳುವವರು, ಸಾವಿರಾರು ಗ್ಯಾಲರಿಗಳು, ನೂರಾರು ಸಮಕಾಲೀನ ಕಲೆಯ ಮ್ಯೂಸಿಯಂಗಳು ಮತ್ತು ಹತ್ತಾರು ಕಲಾ ಪತ್ರಿಕೆಗಳು ಮತ್ತು ಬಹುತೇಕ ಎಲ್ಲ ಪತ್ರಿಕೆಗಳಲ್ಲೂ ಕಲಾ ಅಂಕಣಗಳು ಹುಟ್ಟಿಕೊಂಡವು. ಆದರೆ ಫೋಟೋರಿಯಲಿಸಂನ ಕಲಾವಿದರಲ್ಲಿ ಗೋಯಿಂಗ್ಸ್, ಯೆಕ್ಲೀನ್ ಮತ್ತು ಬೆಚಟ್ಲೆಯವರುಗಳನ್ನು ಹೊರತು ಪಡಿಸಿದರೆ ಉಳಿದ ಯಾವೊಬ್ಬರಲ್ಲೂ ಈ ಶೈಲಿಯ ಹುಟ್ಟಿನ ಬಗ್ಗೆ ಅರಿವಿರಲಿಲ್ಲ. ಈ ಹಾದಿಯ ಇತರ ಕಲಾವಿದರ ಬಗ್ಗೆ ಕೇಳಿರಲಿಲ್ಲ, ಏನನ್ನೂ ತಿಳಿದಿರಲಿಲ್ಲ, ತಮಗೆ ಅಗತ್ಯವೆನ್ನಿಸಿದಂತೆ ಕ್ಯಾಮರಾ ಮತ್ತು ಛಾಯಾಚಿತ್ರಗಳನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಳ್ಳುತ್ತಿದ್ದರು. ಇತರರ ಪ್ರಭಾವ ಸ್ಫೂರ್ತಿ ಇತ್ಯಾದಿಗಳ ಅಗತ್ಯ ಅವರಿಗಿರಲಿಲ್ಲ. ಈ ಕಾರಣದಿಂದಲೇ ಇನ್ನಿತರ ಪ್ರಮುಖ ಕಲಾಚಳುವಳಿಗಿರುವಂತೆ ಯಾವುದೇ ತತ್ವ, ನಿಯಮ ಅಥವಾ ಪೋಷಣೆಗಳನ್ನು ಫೋಟೋರಿಯಲಿಸ್ಟ್ ಕಲಾವಿದರು ಮುಂದಿಟ್ಟುಕೊಳ್ಳಲಿಲ್ಲ. ಛಾಯಾಚಿತ್ರಗಳನ್ನು ಹೋಲುವ ಇವರ ಕಲಾಕೃತಿಗಳು ಎಲ್ಲವನ್ನೂ ತಾವೇ ವಿವರಿಸುವುದರಿಂದ ಇವುಗಳನ್ನು ಅರ್ಥೈಸುವ ಬರಹಗಳು, ವಿಮರ್ಶೆ ಇತ್ಯಾದಿಗಳು ಇನ್ನಿತರ ಕಲಾಶೈಲಿ, ಚಳುವಳಿಗಳ ಸಂದರ್ಭದಲ್ಲಿ ಬಂದಂತೆ ಕಾಣಸಿಕೊಳ್ಳಲಿಲ್ಲ. ಜೊತೆಗೆ, ಈ ಕಲಾವಿದರೇ ತಮ್ಮ ಕಲೆಯ ಕುರಿತು ವ್ಯಾಪಕವಾಗಿ ಉಪನ್ಯಾಸಗಳನ್ನು ನೀಡಿದ್ದಲ್ಲದೆ ಕಲಿಸಲು ಸಹ ಮುಂದಾದರು. ತಮ್ಮ ಕಲೆಯ ಬಗ್ಗೆ ಅನೇಕರು ಬರೆದರು. ಅತ್ಯಂತ ಬುದ್ಧಿಜೀವಿಗಳನ್ನು ಓಲೈಸುವ ಅಗತ್ಯವಿಲ್ಲದೆ, ಜನಸಾಮಾನ್ಯರನ್ನು ಮೆಚ್ಚಿಸುವ ಗುಣದ ಫೋಟೋರಿಯಲಿಸಂ ಇನ್ನಿತರ ಶೈಲಿಗಳ ಕಲಾಕೃತಿಗಳಂತೆ ಯಾವುದೇ ನಿಗೂಢತೆಗಳನ್ನು, ಗುಟ್ಟುಗಳನ್ನು ತನ್ನೊಳಗೆ ಇಟ್ಟುಕೊಂಡಿರಲಿಲ್ಲ. ಎಲ್ಲವನ್ನೂ ಹಗಲು ಬೆಳಕಿನಷ್ಟು ಸ್ಪಷ್ಟವಾಗಿ ತೋರುವ ಶೈಲಿಯದು. ಈ ಗುಣದಿಂದ ಫೋಟೋರಿಯಲಿಸಂ ಕೃತಿಗಳು ಇನ್ನಿತರ ಯಾವುದೇ ಶೈಲಿಯ ಕಲಾಕೃತಿಗಳಿಗಿಂತ ಅತ್ಯಂತ ಹೆಚ್ಚು ಅಥವಾ ಕಡಿಮೆ ಪ್ರಾಮುಖ್ಯ ಹೊಂದಿರುವಂಥವು ಎಂದು ನಿರ್ಧರಿಸಲಾಗದು. ಫೋಟೋರಿಯಲಿಸಂ ತನ್ನದೇ ಆದ ಹಾದಿಯಲ್ಲಿ ನಡೆದು ಬರುತ್ತಿದೆ. ಪಶ್ಚಿಮದ ಎಲ್ಲ ಶೈಲಿಗಳು, ತಂತ್ರಗಳು ಅಲ್ಲಿನ ಸಂದರ್ಭಗಳನ್ನು ಹೊರತುಪಡಿಸಿ, ಭಾರತೀಯ ಕಲಾವಿದರ ಕೃತಿಗಳಲ್ಲಿ ಕಾಣಿಸಿಕೊಂಡಿವೆ. ಇಂದು ನಮ್ಮ ಕಲಾವಿದರಲ್ಲಿ ಏಕಕಾಲಕ್ಕೆ ಹಲವಾರು ಶೈಲಿ-ತಂತ್ರಗಳ ಸೃಷ್ಟಿಗಳು ಮೂಡಿಬರುತ್ತಿವೆ. ಫೋಟೋರಿಯಲಿಸಂ ದೃಷ್ಟಿಯ ಸೃಷ್ಟಿಗಳು ಹಲವರಿಂದ ರಚಿಸಲ್ಪಟ್ಟಿವೆ.

ಬಿಕಾಸ್ ಭಟ್ಟಾಚಾರ್ಯರು 1969ರಲ್ಲಿ ಚಿತ್ರಿಸಿರುವ 'The visitor', 1970ರಲ್ಲಿ ಚಿತ್ರಿಸಿರುವ 'she', 1986-87ರಲ್ಲಿ ಮೂಡಿಬಂದಿರುವ 'Inaguration of a tubewell', 1982ರ 'Montu the Bottle-seller'ಮೊದಲಾದ ಕೃತಿಗಳು ಈ ದೃಷ್ಟಿಯಿಂದ ಗಮನಾರ್ಹ. ಸುಧೀರ್ ಪಟವರ್ಧನ್, ಕೆ.ಟಿ. ಶಿವಪ್ರಸಾದ್, ಅತುಲ್ ದೊಡಿಯ ಮೊದಲಾದವರ ಹಲವಾರು ಕೃತಿಗಳನ್ನು ಈ ಶೈಲಿಯ ವ್ಯಾಪ್ತಿಗೆ ತಂದುಕೊಳ್ಳಬಹುದು, ಕೆಲವು ಕಲಾವಿದರು ಪ್ರಿಂಟ್ ಮಾಧ್ಯಮದಲ್ಲಿ ಫೋಟೋ ಎಚ್ಚಿಂಗ್ ತಂತ್ರವನ್ನೂ ದುಡಿಸಿಕೊಂಡಿದ್ದಾರೆ.

ಇಂದು ಕಲೆ ಹಾಗೂ ಜನಸಾಮಾನ್ಯರ ನಡುವೆ ಭಾರೀ ಅಂತರವಿದೆ. ಇಂದಿನ ಸಮಕಾಲೀನ ಕಲೆಯು ಜನಸಾಮಾನ್ಯರಿಗೆ ಅರ್ಥವಾಗದಿರುವುದೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ. ದೃಶ್ಯ ಕಲೆಗಳನ್ನು ಆಸ್ವಾದಿಸುವ ದೃಷ್ಟಿಯಿಂದ ನಮ್ಮ ಸಾಮಾನ್ಯ ಶಿಕ್ಷಣದಲ್ಲೂ ಗಂಭೀರ ಪ್ರಯತ್ನಗಳು ನಡೆಯುತ್ತಿಲ್ಲ. ಅಂತೆಯೇ ಈ ಕೊರತೆಗಳನ್ನು ಸ್ವಲ್ಪವಾದರೂ ತುಂಬುವುದು ಈ ಜನಪ್ರಿಯ ಕಲಾಮಾಲಿಕೆಯ ಆಶಯ. ಹೀಗೆ ಸಾಮಾನ್ಯರಿಗೆ ದೃಶ್ಯಕಲೆಗಳ ಪ್ರಾಥಮಿಕ ಜ್ಞಾನ ಒದಗಿಸುವ ದೃಷ್ಟಿಯಿಂದಲೇ ಇದನ್ನು ರೂಪಿಸಲಾಗಿದೆ. ಇದರಲ್ಲಿ ದೃಶ್ಯಕಲೆಯ ತಾತ್ವಿಕ ಅಂಶಗಳು, ಮಾಧ್ಯಮಗಳು, ತಂತ್ರಗಳು, ಇತಿಹಾಸ, ಆಧುನಿಕ ಕಲಾ ಪಂಥಗಳು ಇತ್ಯಾದಿ ಹಲವು ವಿಷಯಗಳನ್ನು ಕುರಿತಂತಹ ಹೊತ್ತಿಗೆಗಳನ್ನು ತರುತ್ತಿದ್ದೇವೆ. ತನ್ಮೂಲಕ ದೃಶ್ಯಕಲೆಯನ್ನು ಆಸ್ವಾದಿಸುವ ದಿಸೆಯಲ್ಲಿ ಹೆಚ್ಚಿನ ಜನರು ತೊಡಗುತ್ತಾರೆಂಬ ಮಹತ್ವಾಕಾಂಕ್ಷೆ ಈ ಮಾಲಿಕೆಯದು. ಹೀಗೆ ಜನರನ್ನು 'ಸಹೃದಯ' ರನ್ನಾಗಿಸುವ ದಿಸೆಯಲ್ಲಿ ಇದೊಂದು ಪುಟ್ಟ ಪ್ರಯತ್ನ.

**ಎಚ್. ಎ. ಅನಿಲಕುಮಾರ್**
ಸಂಪಾದಕರು